## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 341
2. ಸದಸ್ಯರ ಹೆಸರು : ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ. (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸುವ ದಿನಾಂಕ : 10-12-2020
4. ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ನಗರ ವ್ಯಾಪ್ತಿಯಲ್ಲಿ ಕಸ ಶುಲ್ಕವನ್ನು ನಿಗಧಿ ಮಾಡುವ ಪ್ರಸ್ತಾವನೆ ಯಾವ ಹಂತದಲ್ಲಿದೆ; (ಪೂರ್ಣ ಮಾಹಿತಿ ನೀಡುವುದು) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಘನತ್ಯಾಜ್ಯ ಉಪಕರಗಳ ಮೂಲಕ ಘನತ್ಯಾಜ್ಯ ನಿರ್ವಹಣೆಯ ಶೇ.5 ರಿಂದ ಶೇ.6 ರಷ್ಟು ಮಾತ್ರ ವೆಚ್ಚ ಭರಿಸುತ್ತಿದ್ದು, ಪಾಲಿಕೆಯು ತ್ಯಾಜ್ಯ ನಿರ್ವಹಣೆಯಲ್ಲಿ ಮಾಡುತ್ತಿರುವ ವೆಚ್ಚವನ್ನು ಘನತ್ಯಾಜ್ಯ ಬಳಕೆದಾರರ ಸೇವಾಶುಲ್ಕ / ಉಪಕರದ (ಸೆಸ್) ಮೂಲಕ ಸರಿದೂಗಿಸುವ ಅವಶ್ಯಕತೆ ಇರುತ್ತದೆ.<br>ಘನತ್ಯಾಜ್ಯ ನಿರ್ವಹಣೆ ನಿಯಮ 2016 ರಲ್ಲಿ ಸಹಾ ತ್ಯಾಜ್ಯ ಉತ್ಪಾದಿಸುತ್ತಿರುವವರಿಂದ Polluter Pay Principal ತತ್ವದನ್ವಯ ವೆಚ್ಚ ಭರಿಸಲು ಅವಕಾಶವಿರುತ್ತದೆ. ಹಾಲಿ ಸಂಗ್ರಹಿಸುತ್ತಿರುವ ಉಪಕರ (ವಾರ್ಷಿಕ ರೂ.43.00 ಕೋಟಿ) ಎಲ್ಲಾ ತ್ಯಾಜ್ಯ ಉತ್ಪಾದಕರಿಗೆ ಅನ್ವಯವಾಗುತ್ತಿದ್ದು, ಸದರಿ ಮೊತ್ತವನ್ನು ಬೀದಿ ಗುಡಿಸುವ ಕೆಲಸ ನಿರ್ವಹಣೆಯ ವೆಚ್ಚಕ್ಕೆ (ವಾರ್ಷಿಕ ರೂ.380.00 ಕೋಟಿ) ಮಾತ್ರ ಪರಿಗಣಿಸಲಾಗಿದ್ದು, ಉಳಿದಂತೆ ದೊಡ್ಡ ಪ್ರಮಾಣದ ತ್ಯಾಜ್ಯ ಉತ್ಪಾದಕರನ್ನು ಹೊರತುಪಡಿಸಿ ಪಾಲಿಕೆಯು ತ್ಯಾಜ್ಯ ಸಂಗ್ರಹಿಸಿ ನಿರ್ವಹಣೆ ಮಾಡುವ ಎಲ್ಲಾ ತ್ಯಾಜ್ಯ ಉತ್ಪಾದಕರು (100 ಕೆ.ಜಿ ಗಿಂತ ಕಡಿಮೆ ಘನತ್ಯಾಜ್ಯ ಉತ್ಪಾದಿಸುವ ಮನೆಗಳು / ಕಟ್ಟಡ ಸಮುಚ್ಚಯಗಳು ಮತ್ತು 100 ಕೆ.ಜಿ ಗಿಂತ ಕಡಿಮೆ ಘನತ್ಯಾಜ್ಯ ಉತ್ಪಾದಿಸುವ ಹಾಗೂ 5000 ಚದರಡಿಗಿಂತ ಕಡಿಮೆ ಆವರಣದಲ್ಲಿರುವ ವಾಣಿಜ್ಯ ಮತ್ತು ಇತರೆ ಕಟ್ಟಡಗಳು) ಗಳಿಗೆ ಪಾಲಿಕೆಯ ಪೌರ ಘನತ್ಯಾಜ್ಯ ನಿರ್ವಹಣೆ ಉಪ ನಿಯಮಗಳನ್ನು ಪೌರ ಘನತ್ಯಾಜ್ಯ ನಿರ್ವಹಣೆ ನಿಯಮಗಳು-2016ರ ನಿಯಮ 15(e) ಮತ್ತು (zf) ರಂತೆ ಸೃಜಿಸಲಾಗಿದ್ದು, ಘನತ್ಯಾಜ್ಯ ನಿರ್ವಹಣೆ ಉಪ ನಿಯಮಗಳು 2020 ಪಾಲಿಕೆ ಸಭೆಯ ವಿಷಯ ಸಂಖ್ಯೆ: 423/2019-20 ದಿನಾಂಕ: 30-07-2019 ರಂದು ಅಂಗೀಕಾರವಾಗಿದ್ದು, ಅಧಿಕೃತವಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ದಿನಾಂಕ: 04-06-2020 ರಂದು ಅಧಿಸೂಚನೆ ಹೊರಡಿಸಲಾಗಿರುತ್ತದೆ. ಅದರಂತೆ ಬಳಕೆದಾರರ ಶುಲ್ಕವನ್ನು (User Fees) ವಿಧಿಸಲಾಗಿರುತ್ತದೆ.<br>ಪ್ರತಿ ಮನೆ ಮತ್ತು ವಾಣಿಜ್ಯ ಕಟ್ಟಡಗಳಿಂದ (ದೊಡ್ಡ ಪ್ರಮಾಣದ ತ್ಯಾಜ್ಯ ಉತ್ಪಾದಕರನ್ನು ಹೊರತುಪಡಿಸಿ) ಬಳಕೆದಾರರ ಶುಲ್ಕವನ್ನು ಪ್ರತಿ ಮಾಹೆಯಾನ ಸಂಗ್ರಹಿಸಬೇಕಾಗಿರುತ್ತದೆ. ಸದರಿ ಮೊತ್ತವನ್ನು |

...2/-

| | | |
|---|---|---|
| | | ಪಾಲಿಕೆ ವತಿಯಿಂದ ಸಂಗ್ರಹಿಸಲು ಹೆಚ್ಚಿನ ಮಾನವ ಸಂಪನ್ಮೂಲ ಬೇಕಾಗಿರುವುದರಿಂದ ಹಾಗೂ ತ್ಯಾಜ್ಯ ಉತ್ಪಾದಕರು ಶುಲ್ಕ ಪಾವತಿಸದೆ ಇದ್ದಲ್ಲಿ ದಂಡ ವಿಧಿಸಿ ವಸೂಲು ಮಾಡುವ ವ್ಯವಸ್ಥೆ ಇಲ್ಲದೇ ಇರುವುದರಿಂದ ಬಳಕೆದಾರರ ಶುಲ್ಕವನ್ನು ಕಟ್ಟುನಿಟ್ಟಾಗಿ ಪ್ರತಿ ಮಾಹೆಯಾನ ಸಂಗ್ರಹಿಸುವುದು ಅತ್ಯವಶ್ಯಕವಾಗಿದೆ. ಈಗಾಗಲೇ ಪ್ರತಿ ಮಾಹೆಯಾನ ಎಲ್ಲಾ ಮನೆಗಳು, ವಾಣಿಜ್ಯ ಕಟ್ಟಡಗಳಿಂದ ವಿದ್ಯುತ್ ಬಳಕೆದಾರರ ಶುಲ್ಕವನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ ರವರು ಸಂಗ್ರಹಿಸುತ್ತಿದ್ದು, ಇದರೊಂದಿಗೆ ಘನತ್ಯಾಜ್ಯ ಬಳಕೆದಾರರ ಶುಲ್ಕವನ್ನು ಸಂಗ್ರಹಿಸುವ ಬಗ್ಗೆ ಬೆಸ್ಕಾಂ (ಬೆಂಗಳೂರು ವಿದ್ಯುತ್ ಸರಬರಾಜು ನಿಗಮ ನಿಯಮಿತ) ರವರೊಂದಿಗೆ ಸದರಿ ಪ್ರಸ್ತಾವನೆಯು ಚರ್ಚೆಯ ಹಂತದಲ್ಲಿರುತ್ತದೆ. |
| ಆ | ಈ ಕಸ ಶುಲ್ಕವನ್ನು ಯಾವ ರೀತಿಯಲ್ಲಿ ಸಂಗ್ರಹ ಮಾಡಲಾಗುವುದು; ಒಂದು ವೇಳೆ ವಿದ್ಯುತ್ ಬಿಲ್‌ನೊಂದಿಗೆ ಜೋಡಿಸುವುದಾದರೆ ಹಲವು ಕಟ್ಟಡಗಳಲ್ಲಿ ಮನೆಗಳು ಖಾಲಿ ಇರುತ್ತವೆ ಮತ್ತು ನೀರಿನ ಮೋಟರ್ ಸಂಪರ್ಕಕ್ಕೆ ಪ್ರತ್ಯೇಕ ಮೀಟರ್ ಅಳವಡಿಸಲಾಗಿರುವ ಇಂತಹ ಕಟ್ಟಡಗಳಲ್ಲಿ ನೀರಿನ ಮೋಟರ್‌ಗಳ ಮೀಟರ್‌ಗಳನ್ನು ಕೈ ಬಿಡಲು ಯಾವ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ; (ವಿವರ ನೀಡುವುದು) | ಪ್ರತಿ ಮಾಹೆಯಾನ ಎಲ್ಲಾ ಮನೆಗಳು, ವಾಣಿಜ್ಯ ಕಟ್ಟಡಗಳಿಂದ ವಿದ್ಯುತ್ ಬಳಕೆದಾರರ ಶುಲ್ಕದೊಂದಿಗೆ ಘನತ್ಯಾಜ್ಯ ಬಳಕೆದಾರರ ಶುಲ್ಕವನ್ನು ಸಂಗ್ರಹಿಸುವ ಪ್ರಸ್ತಾವನೆಯು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ ರವರೊಂದಿಗೆ ಚರ್ಚೆಯ ಹಂತದಲ್ಲಿರುತ್ತದೆ.<br><br>ಪ್ರತಿ ಮನೆಗಳ ಮತ್ತು ವಾಣಿಜ್ಯ ಕಟ್ಟಡಗಳಲ್ಲಿನ ವಿದ್ಯುತ್ ಮೀಟರ್‌ನ RR No ಅನ್ವಯ ಶುಲ್ಕ ವಿಧಿಸಲಾಗುವುದು, ವಿದ್ಯುತ್ ಬಳಕೆ ರಹಿತ ಸಂಪರ್ಕಗಳಿಗೆ ಯಾವುದೇ ಶುಲ್ಕವನ್ನು ವಿಧಿಸದೇ ಇರುವ ಕುರಿತು ಪ್ರಸ್ತಾವನೆಯು ಚರ್ಚೆಯ ಹಂತದಲ್ಲಿರುತ್ತದೆ.<br><br>ನೀರಿನ ಮೋಟರ್ ಅನ್ನು ಬೆಂಗಳೂರು ನೀರು ಸರಬರಾಜು ಮಂಡಳಿ ವತಿಯಿಂದ ಅಳವಡಿಸಲಾಗಿದ್ದು, ಕಸ ಶುಲ್ಕವನ್ನು ವಿದ್ಯುತ್ ಬಿಲ್‌ನೊಂದಿಗೆ ಜೋಡಿಸುವ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದಿಲ್ಲ. |
| ಇ | ತಿಂಗಳಿಗೆ 200ರೂ ಗಿಂತ ಕಡಿಮೆ ವಿದ್ಯುತ್ ಬಳಸುವ ಕೆಳ ಮಧ್ಯಮ ವರ್ಗದ ಜನರಿಗೆ 100 ರೂಗಳ ಕಸ ಶುಲ್ಕವನ್ನು ವಿಧಿಸುವುದು ದುಬಾರಿಯಾಗುವುದಿಲ್ಲವೆ: ಇದನ್ನು ಕಡಿಮೆ ಮಾಡಲು ಸರ್ಕಾರದ ಕ್ರಮಗಳೇನು; (ವಿವರ ನೀಡುವುದು) | ತಿಂಗಳಿಗೆ 200 ರೂ ಗಿಂತ ಕಡಿಮೆ ವಿದ್ಯುತ್ ಬಳಸುವ ಕೆಳ ಮಧ್ಯಮ ವರ್ಗದ ಜನರಿಗೆ ಕಸ ಶುಲ್ಕವನ್ನು ವಿಧಿಸುವುದನ್ನು ಪರಿಷ್ಕರಿಸುವ ಕುರಿತು ಚರ್ಚೆಯ ಹಂತದಲ್ಲಿರುತ್ತದೆ. |

**ಸಂಖ್ಯೆ: ನಅಇ 246 ಎಂಎನ್‌ವೈ 2020**

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ